# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 897 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ) |
| 3) | ಉತ್ತರಿಸಬೇಕಾದ ದಿನಾಂಕ | 20/09/2021 |
| 4) | ಉತ್ತರಿಸುವವರು | ಮಾನ್ಯ ಉನ್ನತ ಶಿಕ್ಷಣ, ಐಟಿ-ಬಿಟಿ ವಿಜ್ಞಾನ ಮತ್ತು ತಂತ್ರಜ್ಞಾನ, ವಿದ್ಯುನ್ಮಾನ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಸಚಿವರು. |

************

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಅನುದಾನ ರಹಿತ ಐ.ಟಿ.ಐ ಕಾಲೇಜುಗಳನ್ನು ಅನುದಾನಕ್ಕೆ ಒಳಪಡಿಸಲು ಇರುವ ನಿಯಮಾವಳಿಗಳೇನು; | ಸರ್ಕಾರಿ ಆದೇಶ ಸಂಖ್ಯೆ: ಕಾಇ 45 ಇಟಿಐ 91, ಬೆಂಗಳೂರು, ದಿ:15-11-1997 ರಲ್ಲಿ ರಾಷ್ಟ್ರೀಯ ವೃತ್ತಿ ತರಬೇತಿ ಪರಿಷತ್ತಿನಿಂದ (ಎನ್.ಸಿ.ವಿ.ಟಿ) 7 ವರ್ಷ ಅಥವಾ ಅದಕ್ಕೂ ಮೀರಿದಂತೆ ಸಂಯೋಜನೆ ಪಡೆದಿರುವ ಖಾಸಗಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಭೋದಕ ಮತ್ತು ಭೋದಕೇತರ ಸಿಬ್ಬಂದಿಯವರಿಗೆ ಸಹಾಯಾನುದಾನ ನೀಡಲಾಗುವುದೆಂಬ ನಿಯಮವಿರುತ್ತದೆ. |
| ಆ) | ಈ ನಿಯಮಾವಳಿಗಳನ್ವಯ ಯಾವ ವರ್ಷದವರೆಗಿನ ಎಷ್ಟು ಐ.ಟಿ.ಐ. ಕಾಲೇಜುಗಳನ್ನು ಅನುದಾನಕ್ಕೆ ಒಳಪಡಿಸಲಾಗಿದೆ; ಇನ್ನು ಎಷ್ಟು ಐ.ಟಿ.ಐ. ಕಾಲೇಜುಗಳನ್ನು ಅನುದಾನಕ್ಕೆ ಒಳಪಡಿಸಲು ಬಾಕಿ ಇದೆ; ಯಾವ ಯಾವ ಕಾರಣಕ್ಕಾಗಿ ಅನುದಾನಕ್ಕೆ ಒಳಪಡಿಸಲಾಗಿಲ್ಲ ಎಂಬುದರ ಕುರಿತು ವಿವರ ನೀಡುವುದು; | 1997ರ ಅನುದಾನ ಸಂಹಿತೆಯ ನಿಯಮಾನುಸಾರ 2000 ನೇ ಇಸವಿಯವರೆಗೆ ಅರ್ಹರಿರುವ ಒಟ್ಟು 196 ಖಾಸಗಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿನ ವೃತ್ತಿ/ಘಟಕಗಳನ್ನು ಅನುದಾನಕ್ಕೆ ಒಳಪಡಿಸಲಾಗಿದೆ:<br><br>ಎನ್.ಸಿ.ವಿ.ಟಿ. ಯಿಂದ ಸಂಯೋಜನೆ ಹೊಂದಿ ಫೆಬ್ರವರಿ-2014 ರವರೆಗೆ 7 ವರ್ಷ ಪೂರೈಸಿರುವ 361+52=413 ಖಾಸಗಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಮಾಹಿತಿಯನ್ನು ಅನುದಾನಕ್ಕೆ ಒಳಪಡಿಸಲು ಕೋರಿ ಸರ್ಕಾರಕ್ಕೆ ದಿನಾಂಕ: 31-01-2015 ಮತ್ತು 04-02-2016 ರಂದು ಪ್ರಸ್ತಾವನೆಯನ್ನು ಸಲ್ಲಿಸಲಾಗಿತ್ತು.<br><br>ಸರ್ಕಾರಿ ಆದೇಶ ಸಂಖ್ಯೆ: ಕಾಇ 118 ಇಟಿಐ 2010 ಬೆಂಗಳೂರು, ದಿನಾಂಕ: 30/08/2010 ರ ಅನ್ವಯ ರಾಜ್ಯದ ಖಾಸಗಿ ಕೈಗಾರಿಕಾ ತರಬೇತಿ ಕೇಂದ್ರಗಳಿಗೆ ವಿದ್ಯಾರ್ಥಿ ಕೇಂದ್ರೀಕೃತ ಅನುದಾನ ಪದ್ಧತಿಯು ದಿನಾಂಕ: 01/04/2010 ರಿಂದ ಜಾರಿಗೆ ತರಲು ಮಂಜೂರಾತಿ ನೀಡಲಾಗಿರುತ್ತದೆ. ಈ ಯೋಜನೆಗೆ ಯಾವುದೇ ಸಂಸ್ಥೆಗಳು ಪ್ರಸ್ತಾವನೆ ಸಲ್ಲಿಸಿರುವುದಿಲ್ಲ.<br><br>ಈ ಹಿಂದೆ ಸರ್ಕಾರದ ಆದೇಶ ಸಂಖ್ಯೆ: ಕಾಇ 284 ಇಟಿಐ 2005 ಬೆಂಗಳೂರು, ದಿನಾಂಕ: 21-08-2010 ರನ್ವಯ "ಇನ್ನು ಮುಂದೆ ಯಾವುದೇ ಕೈಗಾರಿಕಾ ತರಬೇತಿ ಕೇಂದ್ರವನ್ನು 1997ರ ಅನುದಾನ ಸಂಹಿತೆಗೆ ಒಳಪಡಿಸತಕ್ಕದ್ದಲ್ಲವೆಂದು" ಆದೇಶ ಹೊರಡಿಸಿರುವ ಹಿನ್ನೆಲೆಯಲ್ಲಿ ಯಾವುದೇ ಖಾಸಗಿ ಕೈ.ತ.ಸಂಸ್ಥೆಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಅವಕಾಶಗಳಿರುವುದಿಲ್ಲ. |

--2

| | | |
|---|---|---|
| ಇ) | ಬಾಕಿ ಇರುವ ಪ್ರಸ್ತಾವನೆಗಳನ್ನು ಅನುದಾನಕ್ಕೆ ಒಳಪಡಿಸುವ ಪ್ರಕ್ರಿಯೆ ಚಾಲನೆಯಲ್ಲಿದೆಯೇ? (ಇದ್ದಲ್ಲಿ ಪ್ರಸ್ತಾವನೆಯ ಸಂಪೂರ್ಣ ವಿವರವನ್ನು ಕಾಲೇಜುಗಳ ವಿವರಗಳೊಂದಿಗೆ ತಾಲ್ಲೂಕುವಾರು ಒದಗಿಸುವುದು) | ಚಾಲ್ತಿಯಲ್ಲಿರುವುದಿಲ್ಲ. |

**ಸಂಖ್ಯೆ: ಕೌಉಜೀಇ 54 ಕೈತಪ್ರ 2021**

(ಡಾ.ಸಿ.ಎನ್.ಅಶ್ವಥ ನಾರಾಯಣ)
**ಉನ್ನತ ಶಿಕ್ಷಣ, ಐಟಿ–ಬಿಟಿ ವಿಜ್ಞಾನ ಮತ್ತು ತಂತ್ರಜ್ಞಾನ, ವಿದ್ಯುನ್ಮಾನ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಸಚಿವರು.**